# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1026 (೩೪೩) |
| 2 | ಸದಸ್ಯರ ಹೆಸರು | ಶ್ರೀ ಎಸ್.ನಾಗರಾಜ್ (ಸಂದೇಶ್ ನಾಗರಾಜ್) (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| 3 | ಉತ್ತರಿಸಬೇಕಾದ ದಿನಾಂಕ | 10.03.2021 |
| 4 | ಉತ್ತರಿಸುವ ಸಚಿವರು | ಕಂದಾಯ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಮೈಸೂರು ಮತ್ತು ಚಾಮರಾಜ ನಗರ ಜಿಲ್ಲೆಯ ತಾಲ್ಲೂಕುಗಳಿಗೆ ಮಂಜೂರಾಗಿರುವ ಭೂಮಾಪಕರ ಹುದ್ದೆಗಳ ಸಂಖ್ಯೆ ಎಷ್ಟು; ಭರ್ತಿಯಾಗಿರುವ ಹುದ್ದೆಗಳು ಎಷ್ಟು; ಹಾಗೂ ಖಾಲಿ ಇರುವ ಹುದ್ದೆ ಎಷ್ಟು; | ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ವ್ಯಾಪ್ತಿಗೆ ಒಳಪಟ್ಟಂತೆ ಭೂಮಾಪಕರ ಹುದ್ದೆಗಳ ವಿವರ ಈ ಕೆಳಕಂಡಂತಿದೆ:-<br><table><tr><th>ಜಿಲ್ಲೆ</th><th>ಮಂಜೂರಿಯಾದ ಹುದ್ದೆಗಳು</th><th>ಭರ್ತಿಯಾದ ಹುದ್ದೆಗಳು</th><th>ಖಾಲಿ ಹುದ್ದೆಗಳು</th></tr><tr><td>ಮೈಸೂರು</td><td>185</td><td>178</td><td>07</td></tr><tr><td>ಚಾಮರಾಜನಗರ</td><td>78</td><td>72</td><td>06</td></tr></table> |
| ಆ) | ತಾಲ್ಲೂಕುಗಳಲ್ಲಿ ಭೂಮಾಪಕರ ಕೊರತೆ ಉಂಟಾಗಿದ್ದು, ಜಮೀನಿನ ಅಳತೆ, ಮನೆಗಳ ಇ-ಖಾತೆ ನೀಡುವಲ್ಲಿ ಬಹಳ ವಿಳಂಬ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಕೂಡಲೇ ಸರ್ವೆಯರ್‌ಗಳ ಹುದ್ದೆಗಳನ್ನು ಖಾಯಂ ಅಥವಾ ತಾತ್ಕಾಲಿಕವಾಗಿ ಭರ್ತಿ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದೇ; | ಬಂದಿದೆ.<br>ಜಿಲ್ಲೆಗಳಲ್ಲಿ ಭೂಮಾಪಕರ ಕೊರತೆಯಿಂದ ಜಮೀನಿನ ಅಳತೆ ಇತ್ಯಾದಿ ಕಾರ್ಯದಲ್ಲಿ ಆಗುತ್ತಿರುವ ವಿಳಂಬವನ್ನು ತಪ್ಪಿಸುವ ಸಲುವಾಗಿ, ಜಿಲ್ಲೆಯ ಹೆಚ್ಚಿನ ಪ್ರಕರಣಗಳು ಬಾಕಿ ಇರುವ ತಾಲ್ಲೂಕುಗಳಿಗೆ ಕಡಿಮೆ ಪ್ರಕರಣಗಳು ಇರುವ ತಾಲ್ಲೂಕಿನಿಂದ ಭೂಮಾಪಕರನ್ನು ನಿಯೋಜನೆ ಮಾಡಿ ಪ್ರಕರಣಗಳನ್ನು ವಿಲೇಗೊಳಿಸಲು ಕ್ರಮ ಕೈಗೊಳ್ಳಲಾಗುತ್ತಿದೆ.<br>ಅಲ್ಲದೆ ಹೊಸದಾಗಿ 2072 ಪರವಾನಗಿ ಭೂಮಾಪಕರ ಆಯ್ಕೆ ಕುರಿತು ಅಧಿಸೂಚನೆ ಹೊರಡಿಸಿ ಅರ್ಜಿಗಳನ್ನು ಆಹ್ವಾನಿಸಿದ್ದು, ದಿನಾಂಕ 1-2-2021 ಮತ್ತು 2-2-2021 ರಂದು ಪರೀಕ್ಷೆಯನ್ನು ನಡೆಸಿ, ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗಿದೆ. ಸದರಿ ಅಭ್ಯರ್ಥಿಗಳಿಗೆ ತರಬೇತಿ ನೀಡಿದ ನಂತರ ಉತ್ತೀರ್ಣರಾದವರಿಗೆ ಪರವಾನಗಿ ನೀಡಿ ರಾಜ್ಯದ ವಿವಿಧ ತಾಲ್ಲೂಕುಗಳಿಗೆ ಕಾರ್ಯ ನಿಯೋಜನೆ ಮಾಡಲಾಗುವುದು. |
| ಇ) | ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ಎಷ್ಟು ಮಂದಿ ಪರವಾನಗಿ ಪಡೆದ ಭೂಮಾಪಕರು ಎಷ್ಟು ವರ್ಷ ಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ; ಖಾಯಂಗೊಳಿಸುವಂತೆ ಅವರು ಸರ್ಕಾರಕ್ಕೆ ಮನವಿ ಸಲ್ಲಿಸಿರುವುದು ನಿಜವೇ; ಅನೇಕ ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ ಪರವಾನಗಿ | ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ವ್ಯಾಪ್ತಿಯಲ್ಲಿ ಪರವಾನಗಿ ನೀಡಲಾಗಿರುವ ಪರವಾನಗಿ ಭೂಮಾಪಕರ ವರ್ಷವಾರು ವಿವರ ಈ ಕೆಳಕಂಡಂತಿದೆ:-<br><table><tr><th rowspan="2">ಜಿಲ್ಲೆ</th><th colspan="5">ವರ್ಷ</th><th rowspan="2">ಒಟ್ಟು</th></tr><tr><th>2002</th><th>2003</th><th>2005</th><th>2008</th><th>2014</th></tr><tr><td>ಮೈಸೂರು</td><td>165</td><td>01</td><td>00</td><td>150</td><td>00</td><td>**316**</td></tr><tr><td>ಚಾಮರಾಜನಗರ</td><td>38</td><td>01</td><td>01</td><td>66</td><td>14</td><td>**120**</td></tr></table> |

<table>
<tr>
<td></td>
<td>ಪಡೆದ ಭೂಮಾಪಕರನ್ನು ಖಾಯಂ ಮಾಡಲು ಕ್ರಮ ತೆಗೆದುಕೊಳ್ಳಲಾಗುವುದೇ?</td>
<td>

| ಜಿಲ್ಲೆ | ಪರವಾನಗಿ ಚಾಲ್ತಿಯಲ್ಲಿರುವ ಪರವಾನಗಿ ಭೂಮಾಪಕರ ಸಂಖ್ಯೆ |
|---|---|
| ಮೈಸೂರು | 245 |
| ಚಾಮರಾಜನಗರ | 85 |

ಪರವಾನಗಿ ಭೂಮಾಪಕರ ಸೇವೆಯನ್ನು ಸಕ್ರಮಗೊಳಿಸಲು ಕೋರಿಕೆ ಇರುತ್ತದೆ. ಆದರೆ ಪರವಾನಗಿ ಭೂಮಾಪಕರ ಸೇವೆಯನ್ನು ಖಾಯಂಗೊಳಿಸಲು ಅಥವಾ ಸೇವಾಭದ್ರತೆ ನೀಡಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ.</td>
</tr>
</table>

**ಸಂಖ್ಯೆ: ಕಂಇ 31 ಎಸ್ಎಸ್‌ಸಿ 2021**

(ಆರ್.ಅಶೋಕ)

ಕಂದಾಯ ಸಚಿವರು